# ಮುಂಜಾವು
ವಾರಪತ್ರಿಕೆ.
ಸಂಪಾದಕ: ಸಿರಿಮನೆ ನಾಗರಾಜ್.
'MUNJAVU' Kannada Weekly. KOPPA - CHM.
5ನೇ ವರ್ಷ 21ನೇ ಸಂಚಿಕೆ ಕೊಪ್ಪ 8-2-1987 ಭಾನುವಾರ ಬೆಲೆ 50 ಪೈಸೆ




## ನೆರವು, ಉತ್ತೇಜನಗಳಿಲ್ಲದೆ ಸೊರಗುತ್ತಿರುವ 'ಡ್ವಾಕ್ರಾ' ಘಟಕಗಳು

ಕೊಪ್ಪ: 'ಯುನಿಸೆಫ್' ನೆರವಿನ 'ಡ್ವಾಕ್ರಾ' ಯೋಜನೆಯಡಿ ಆರಂಭಿಸಲಾದ ಗ್ರಾಮೀಣ ಬಡ ಮಹಿಳೆಯರ ಸ್ವಯಂ ಉದ್ಯೋಗ ಘಟಕಗಳಲ್ಲಿ ಎರಡು ಅಥವಾ ಮೂರು ಮಾತ್ರ ಸ್ವಲ್ಪ ಚೇತರಿಸಿಕೊಂಡಿದ್ದರೆ, ಉಳಿದವು ತಾವೂ ಮುಳುಗುತ್ತ, ತಮ್ಮನ್ನು ನಂಬಿದ ಫಲಾನುಭವಿಗಳನ್ನೂ ಸಹ ಸಾಲದ ಮಡುವಿನಲ್ಲಿ ಮುಳುಗಿಸುವ ಹಂತದಲ್ಲಿವೆ.

ಕೊಪ್ಪ ತಾಲ್ಲೂಕಿನ ಕೆಲವು ಘಟಕಗಳ ಸಮೀಕ್ಷೆ ಇಲ್ಲಿದೆ.

### ಫೀನಾಯಿಲ್

ಕೊಪ್ಪಕ್ಕೆ ಸಮೀಪದ ರಾಘವೇಂದ್ರ ನಗರ ಬಡಾವಣೆಯಲ್ಲಿರುವ 'ಆದರ್ಶ ಡ್ವಾಕ್ರಾ ಘಟಕ'ದವರು ತಯಾರಿಸುತ್ತಿರುವ ಫೀನಾಯಿಲ್‌ಗೆ ಈಚೆಗಷ್ಟೇ ಜಿಲ್ಲೆಯ ಪಶು ಸಂಗೋಪನಾ ಇಲಾಖೆಯಿಂದ ದೊಡ್ಡ ಪ್ರಮಾಣದ ಬೇಡಿಕೆ ಬಂದಿದೆ.

ಫೀನಾಯಿಲ್ ಪರೀಕ್ಷಿಸಿ ಅದರ ಗುಣಮಟ್ಟ ಉತ್ತಮವಾಗಿರುವುದನ್ನು ಖಚಿತಪಡಿಸಿಕೊಂಡಿರುವ ಇಲಾಖೆ 1000 ಲೀ.ಗಳನ್ನು ಒದಗಿಸಲು ಬೇಡಿಕೆ ಮಂಡಿಸಿದೆ.

"ಈ ಫೀನಾಯಿಲ್ ಉತ್ತಮವಾಗಿಲ್ಲವಂತೆ, 'ಸ್ಟ್ರಾಂಗ್' ಸಾಲದಂತೆ" ಮುಂತಾಗಿ ಕೊಪ್ಪದಲ್ಲಿ ಹರಡಿರುವ ವಿಚಿತ್ರವಾದ, ಅಪ್ರಬುದ್ಧವಾದ ಅಂತೆಕಂತೆಯೊಂದು ಎಷ್ಟು ಹಾಸ್ಯಾಸ್ಪದ ಎಂಬುದು ಇಲಾಖೆಯ ತಜ್ಞರ ಈ ಅಭಿಪ್ರಾಯದಿಂದಾಗಿ ಸಾಬೀತಾದಂತಾಗಿದೆ.

ಮಾರುಕಟ್ಟೆಯಲ್ಲಿ ದೊರೆಯುವ, ಬಹುಶಃ ವಿದೇಶೀ ಬಹು ರಾಷ್ಟ್ರೀಯ ಬಂಡವಾಳಗಾರ ಕಂಪೆನಿಗಳಿಗೆ ಸೇರಿದ ಇತರ ಬ್ರಾಂಡ್‌ಗಳ ಫೀನಾಯಿಲ್‌ಗೆ ಇಲ್ಲಿನ ಉತ್ಪಾದನೆ ಗುಣಮಟ್ಟದಲ್ಲಿ ಏನೂ ಕಮ್ಮಿಯಿರದಿದ್ದರೂ ಬೆಲೆ ಬಹಳ ಕಡಿಮೆಯಿರುವುದು ಗಮನಾರ್ಹವಾಗಿದೆ. ಲೀಟರಿಗೆ ಕೇವಲ 11 ರೂ.ಗೆ ಈ ಫೀನಾಯಿಲ್ ದೊರೆಯುತ್ತದೆ.

ಗ್ರಾಮಾಂತರದ ಅತಿ ಕಡಿಮೆ ಆದಾಯ ವರ್ಗಗಳ ಮಹಿಳೆಯರು ಶ್ರಮ ವಹಿಸಿ ಸ್ವಂತವಾಗಿ ನಡೆಸುತ್ತಿರುವ ಈ ಡ್ವಾಕ್ರಾ ಘಟಕಕ್ಕೆ ಆಸ್ಪತ್ರೆಗಳು ಮತ್ತು ಮುನಿಸಿಪಾಲಿಟಿಗಳಿಂದ ಇನ್ನೂ ದೊಡ್ಡ ಆರ್ಡರುಗಳು ದೊರಕುವ ನಿರೀಕ್ಷೆಯಿದೆ. ಆದರೆ ಅಲ್ಲಿಯವರೆಗೂ ಈ ಘಟಕ ಅಪಾಯದಿಂದ ಪೂರ್ತಿ ಪಾರಾದಂತೇನಲ್ಲ.

### ಮೇಣದ ಬತ್ತಿ

ಇದೇ ರೀತಿ ಉತ್ತಮವಾದ ಮೇಣದ ಬತ್ತಿಗಳನ್ನು ತಯಾರಿಸುತ್ತಿರುವ ತೆಂಗಿನಮನೆಯ 'ಪ್ರಜ್ವಲ ಡ್ವಾಕ್ರಾ ಘಟಕ' ಇನ್ನೂ ಸರಿಯಾದ ಬೇಡಿಕೆಗಳ ಉತ್ತೇಜನ ಸಿಗದೆ ತೊಂದರೆಯಲ್ಲಿದೆ. ಆದರೂ ಈ ಘಟಕದ ಮಹಿಳೆಯರು ಸುತ್ತಮುತ್ತಲ ಊರುಗಳಲ್ಲಿ ಅಂಗಡಿ–ಕಚೇರಿ–ವಸತಿ ಪ್ರದೇಶಗಳಲ್ಲಿ ಸುತ್ತಾಡಿ ಮೇಣದ ಬತ್ತಿಗಳನ್ನು ಖರ್ಚು ಮಾಡುತ್ತ ತಮ್ಮ ಬ್ಯಾಂಕ್ ಸಾಲದ ಸುಮಾರು ಮುಕ್ಕಾಲು ಭಾಗದಷ್ಟನ್ನು ತೀರಿಸಿದ್ದಾರೆ. (ಸಬ್ಸಿಡಿ ಸೇರಿ).

ಪೇಟೆಯಲ್ಲಿ ದೊರೆಯುವ ಮೇಣದ ಬತ್ತಿಗಳಿಗಿಂತ ಅತಿ ಕಡಿಮೆ ಬೆಲೆಗೆ ದೊರೆಯುವ ಈ 'ಪ್ರಜ್ವಲ' ಬತ್ತಿಗಳು ಉತ್ತಮ ಗುಣಮಟ್ಟದವೇ ಆಗಿವೆ.

### ಪೌಷ್ಟಿಕ ಆಹಾರ

ಈ ಮೇಲಿನ ಎರಡೂ ಘಟಕಗಳಿಗಿಂತ ಭಿನ್ನವಾಗಿ. ಬೇಡಿಕೆ ದೃಷ್ಟಿಯಿಂದ ಸಾಕಷ್ಟು ಸುಸ್ಥಿತಿಯಲ್ಲಿರುವ ಘಟಕ ಅಸಗೋಡಿನದು. ಇದು ತಯಾರಿಸುವ ಪೌಷ್ಟಿಕ ಶಿಶು ಆಹಾರವನ್ನು ಜಿಲ್ಲೆಯ ಮೂರೂ ಅಂಗನವಾಡಿ ಘಟಕಗಳಿಗೆ (ಕೊಪ್ಪ, ಮೂಡಿಗೆರೆ, ಕಡೂರು) ಸತತವಾಗಿ ಪೂರೈಸುವ ವ್ಯವಸ್ಥೆ ಈಗಾಗಲೇ ಆಗಿದ್ದು, ಇದಲ್ಲದೆ ಜಿಲ್ಲೆಯ ಕೂಳಜೆ ಪ್ರದೇಶ ಅಭಿವೃದ್ಧಿ ಯೋಜನೆಯ ಬೇಡಿಕೆ ಕೂಡ ಸಿಕ್ಕುವುದರಲ್ಲಿದೆ.

ಆರಂಭದ ಒಂದೂ ಕಾಲು ವರ್ಷ ಸಂಬಂಧಪಟ್ಟ ಇಲಾಖೆಯ ಅಕ್ಷಮ್ಯ ನಿರ್ಲಕ್ಷ್ಯದಿಂದಾಗಿ ಸತ್ತೇ ಹೋಗಬಹುದಾಗಿದ್ದ ಈ ಘಟಕ, ಅದರ ಪ್ರವರ್ತಕರಾದ ಅಸಗೋಡಿನ ಮಹಿಳಾ ಸಮಾಜದ ಅಧ್ಯಕ್ಷೆಯವರ (ಜಯಲಕ್ಷ್ಮಿ ವಾಸಪ್ಪ ಗೌಡ) ನೇತೃತ್ವದಲ್ಲಿ ಘಟಕದ ಫಲಾನುಭವಿಗಳು ನಡೆಸಿದ ಸತತ ಹೋರಾಟದ ಫಲವಾಗಿ ಇದೀಗ ಚೇತರಿಸಿಕೊಂಡು, ಒಂದು ತಂಡದ ಬದಲು ಈಗ 2 ತಂಡಗಳನ್ನು (ಒಟ್ಟು 22 ಮಂದಿ) ಒಳಗೊಂಡಿದ್ದು, ತನ್ನ ಸಾಲವನ್ನು ತೀರಿಸುತ್ತ ದಿಟ್ಟವಾಗಿ ಮುನ್ನಡೆಯುತ್ತಿದೆ.

ಆದರೆ, ಸ್ವತಃ ಇಂಥ ಯಾವುದೇ ಒಳ್ಳೆಯ ಕಾರ್ಯವೊಂದನ್ನು ಸಂಘಟಿಸಿ ಯಶಸ್ವಿಗೊಳಿಸುವ ಯೋಗ್ಯತೆ, ಸಾಮರ್ಥ್ಯ ಪ್ರಾಮಾಣಿಕ ಕತಕಳಿಗಳಿಲ್ಲದಿದ್ದರೂ, ಬೇರೆಯವರು ಅಂಥದನ್ನು ಮಾಡಿ ಕೀರ್ತಿ ಗಳಿಸುವುದನ್ನು ನೋಡಿ ಕರುಬಿ ಅದಕ್ಕೆ ಕಲ್ಲು ಹಾಕುವ ನಮ್ಮ ಸಮಾಜದ ಹುಳುಗಳು ಇಲ್ಲೂ ವಿಷದ ಬೀಜ ಬಿತ್ತಿ ಈ ಘಟಕವನ್ನು ಏನಕೇನ ಕೊಲ್ಲಲು ಶತಪ್ರಯತ್ನ ಮಾಡುತ್ತಿದ್ದು, ಇದಕ್ಕೆ ಈ ತಾಲ್ಲೂಕಿನ ಇಬ್ಬರು ಪ್ರಮುಖ ಜಿಲ್ಲಾ ಪರಿಷತ್ ಸದಸ್ಯರಾದ ಬಿ.ಜಿ. ಚಿದಂಬರ್ ಮತ್ತು ಸುಮಿತ್ರಮ್ಮನವರ ಕೃಪಾಶೀರ್ವಾದಗಳನ್ನೂ ಗಳಿಸಿಕೊಂಡಿರುವ ಬಗ್ಗೆ ನಂಬಲರ್ಹವಾಗಿ ತಿಳಿದು ಬಂದಿದೆ. ಬಿ.ಜಿ. ಚಿದಂಬರ್‌ರಂಥ ಅನುಭವಿ ಮುಖಂಡರು ಗ್ರಾಮಾಭಿವೃದ್ಧಿಯ ರಂಗದಲ್ಲಿ ತಾವು ಗಳಿಸಿರುವ ಹೆಸರನ್ನು ಉಳಿಸಿಕೊಳ್ಳುವಂಥ ವಿವೇಚನೆಯನ್ನು ತೋರಬೇಕಾಗಿದೆ.

### ಸೊರಗಿದ ಘಟಕಗಳು

ತಕ್ಕಮಟ್ಟಿಗೆ ಯಶಸ್ವಿಯಾಗಿರುವ ಈ ಮೂರು ಘಟಕಗಳನ್ನು ಬಿಟ್ಟರೆ, ತಾಲ್ಲೂಕಿನಲ್ಲಿ ಆರಂಭಿಸಲಾಗಿರುವ ಇನ್ನೂ ಐದಾರು ಡ್ವಾಕ್ರಾ ಘಟಕಗಳು ಇಷ್ಟೂ ಸ್ಥಿತಿಯನ್ನು ಮುಟ್ಟದೆ ಪೂರಾ ಸೊರಗಿವೆ. ಕುದುರೆಗುಂಡಿಯ ಬಿದಿರು ಗುಡಿ ಕೈಗಾರಿಕೆ ಘಟಕ (ಮೇದಾರರು), ಗುಣವಂತೆ ಬಡಾವಣೆಯ ಕ್ಲೀನಿಂಗ್ ಪೌಡರ್ ಘಟಕ, ಬೊಮ್ಲಾಪುರದ ಕುಂಬಾರಿಕೆ ಘಟಕ, ಲೋಕನಾಥಪುರದ ಹಂದಿ ಸಾಕಣೆ ಘಟಕ, ಜಯಪುರದ ಸ್ವೆಟರ್ ಹೆಣಿಗೆ ಘಟಕ— ಮುಂತಾದುವು ಈ ಪಟ್ಟಿಯಲ್ಲಿ ಬರುವ 'ದುರ್ದೈವಿ'ಗಳು.

ವಿಶೇಷ ಜಿಲ್ಲಾಧಿಕಾರಿಗಳು ಮತ್ತು ಸಮಾಜ ಕಲ್ಯಾಣ ಇಲಾಖೆಯ ಡ್ವಾಕ್ರಾಕ್ಕೆಂದೇ ಇರುವ ಅಧಿಕಾರಿ ಇನ್ನಾದರೂ ತಮ್ಮ ದಂತ ಗೋಪುರಗಳಿಂದ ಈ ಹಳ್ಳಿಗಾಡಿಗೆ ಇಳಿದು ಬಂದು ಇವುಗಳಿಗೆ ಸೂಕ್ತ 'ಚಿಕಿತ್ಸೆ' ಕೊಡಿಸಬೇಕಾಗಿದೆ. ತಮ್ಮ ಕೈ ಕೆಳಗಿನ ಸಿಬ್ಬಂದಿಯನ್ನಾಗಲಿ, ಸಿಬ್ಬಂದಿಯ ಕೊರತೆ – ಕೆಲಸದ ಹೊರೆಗಳಿಂದ ತತ್ತರಿಸುವಂತಿರುವ ಕ್ಷೇತ್ರಾಭಿವೃದ್ಧಿ ಅಧಿಕಾರಿಯನ್ನಾಗಲಿ ವೈಫಲ್ಯಕ್ಕೆ ಬಲಿಪಶು ಮಾಡುವುದರಿಂದ ಪ್ರಯೋಜನವಿಲ್ಲ.

ಸಮಸ್ಯೆಯ ಮೂಲ ಕಾರಣವನ್ನು ಪತ್ತೆಹಚ್ಚಬಲ್ಲ ತಾಳ್ಮೆ ಮತ್ತು ವಿಶ್ಲೇಷಕ ಮನೋಭಾವಗಳಿದ್ದಲ್ಲಿ ಇವುಗಳಿಗೆ ಜೀವದಾನ ನೀಡಲು ಈಗಲೂ ಕಾಲ ಮಿಂಚಿಲ್ಲ.

## ಶಂಕರ್ ಸಾರಿಗೆ ಕಾರ್ಮಿಕ ಸಂಘದಿಂದ ಬೇಡಿಕೆ ಪತ್ರ ಸಲ್ಲಿಕೆ

ಕೊಪ್ಪ : ಇತ್ತೀಚೆಗೆ ಬಿ.ಎಂ.ಎಸ್. ಕಾರ್ಮಿಕ ಸಂಘಟನೆಯಿಂದ ಬೇರ್ಪಟ್ಟು ಎ.ಐ.ಟಿ.ಯು.ಸಿ.ಗೆ ಸೇರ್ಪಡೆಗೊಳ್ಳುವ ಮೂಲಕ ಪುನಃ ಬಲಗೊಳ್ಳಲು ಹೆಣಗುತ್ತಿರುವ ಶಂಕರ್ ಸಾರಿಗೆ ಸಂಸ್ಥೆಯ ಕಾರ್ಮಿಕ ಸಂಘ ತನ್ನ ಮೊಟ್ಟ ಮೊದಲ ಬೇಡಿಕೆ ಪತ್ರ (ಚಾರ್ಟರ್ ಆಫ್ ಡಿಮ್ಯಾಂಡ್ಸ್)ವನ್ನು ಮಾಲೀಕರಿಗೆ ಸಲ್ಲಿಸಿದೆ. ರಿಜಿಸ್ಟರ್ಡ್ ಅಂಚೆಯಲ್ಲಿ ಕಳಿಸಿದ್ದ ಇದನ್ನು ಮಾಲೀಕ ವರ್ಗ ತೆಗೆದುಕೊಂಡಿದೆ.

### ಕನಿಷ್ಠ ಸೌಲಭ್ಯಗಳು, ಮೂಲಭೂತ ಬೇಡಿಕೆಗಳು

ಈ ಹಿಂದೆಯೇ ವರದಿಯಾಗಿರುವಂತೆ ಇಲ್ಲಿನ ಕಾರ್ಮಿಕರು ಕಾರ್ಮಿಕ ಕಾಯಿದೆಗಳ ರೀತ್ಯಾ ಕನಿಷ್ಠ ಸೌಲಭ್ಯಗಳಿಂದ ವಂಚಿತರಾಗಿರುವರೆನ್ನಲಾಗಿದ್ದು, ಈ ದಿಸೆಯಲ್ಲಿ ಈ ಬೇಡಿಕೆ ಪತ್ರ ಹಲವು ಮೂಲಭೂತ ಬೇಡಿಕೆಗಳನ್ನು ಒಳಗೊಂಡಿರುವುದು ಕಾರ್ಮಿಕ ವೃಂದಕ್ಕೆ ಸಾಕಷ್ಟು ಸಮಾಧಾನದ ಜೊತೆಗೆ ಹೆಚ್ಚಿನ ನಿರೀಕ್ಷೆಯನ್ನೂ ಹುಟ್ಟಿಸಿದೆಯೆನ್ನಲಾಗಿದೆ.

ಕಾಯಿದೆಗಳ ರೀತ್ಯಾ ವಿವಿಧ ಕೆಲಸಗಳಿಗೆ ದರ್ಜೆಗಳನ್ನೂ ಹುದ್ದೆಗಳನ್ನೂ ನಿಗದಿ ಪಡಿಸುವುದು. ಮತ್ತು ಅವುಗಳಿಗೆ ನಿರ್ದಿಷ್ಟ ಸಂಬಳದ ಶ್ರೇಣಿಗಳನ್ನು ನಿಗದಿಪಡಿಸುವುದು, ದುಡಿಮೆ ಅವಧಿಯ ನಿಗದಿ, ಅವಧಿ ಮೀರಿದ ದುಡಿಮೆಗೆ ಓವರ್ ಟೈಂ, ನಿಗದಿತ ವಾರದ ರಜೆ ಮತ್ತು ಇತರ ರಜೆಗಳು, ವಿವಿಧ ರೀತಿಯ ಭತ್ಯೆಗಳು. ಸಮ ವಸ್ತ್ರ, ಅಗತ್ಯಕ್ಕೆ ತಕ್ಕಷ್ಟು ಸಂಖ್ಯೆಯ ಕಾರ್ಮಿಕರ ನೇಮಕ, ಅವರ ತರಬೇತಿ, ಖಾಯಂ ಮತ್ತು ಸೇವಾ ನಿಯಮಗಳು, ಬ್ಯಾಟಾ, ಚಿಕ್ಕಮಗಳೂರಿಗೆ ವರ್ಗಾಯಿಸಿರುವ ಸಂಜೀವ ಅವರನ್ನು ವಾಪಸ್ ಕರೆಸಿಕೊಳ್ಳುವುದು, ಮುಂತಾಗಿ, ಈವರೆಗೆ ಯಾವುದೇ ನ್ಯಾಯಯುತ ಇತ್ಯರ್ಥ ಕಾಣದ್ದ ಎಲ್ಲ ಸಮಸ್ಯೆಗಳನ್ನೂ ಈ ಬೇಡಿಕೆ ಪತ್ರ ಒಳಗೊಂಡು ಬಹಳ ವೈಜ್ಞಾನಿಕವಾಗಿದ್ದು, ಯಾವುದೇ ದೃಷ್ಟಿಯಿಂದಲೂ ಅತ್ಯುತ್ತಮ ಚಾರ್ಟರ್‌ಗಳಲ್ಲೊಂದಾಗಿದೆ ಎಂದು ಹೇಳಲಾಗಿದೆ.

ಈ ಬೇಡಿಕೆಗಳ ಕುರಿತು ಚರ್ಚಿಸಿ, ಸೌಹಾರ್ದಯುತವಾಗಿ ಒಡಂಬಡಿಕೆಗೆ ಬರಲು ಸಾಧ್ಯವಾಗುವಂತೆ ಶೀಘ್ರವೇ ಮಾತುಕತೆ ಏರ್ಪಡಿಸಬೇಕೆಂದು ಸಂಘ ಮಾಲೀಕ ವರ್ಗವನ್ನು ಒತ್ತಾಯಿಸಿದ್ದು. ಆ ಕಡೆಯಿಂದ ಈವರೆಗೆ ಯಾವುದೇ ರೀತಿಯ ಪ್ರತ್ಯುತ್ತರ ಬಂದಿಲ್ಲವೆಂದು ಸಂಘ ತಿಳಿಸಿದೆ.

# ಜಿ. ಪರಿಷತ್, ಮಂ. ಪಂಚಾಯತ್ ಚುನಾವಣೆ ಮತ್ತು ಅನಂತರ....

ಜಿಲ್ಲಾ ಪರಿಷತ್ ಮತ್ತು ಮಂಡಲ ಪಂಚಾಯತುಗಳನ್ನೊಳಗೊಂಡ ನಮ್ಮ ರಾಜ್ಯದ ಹೊಸ ಪಂಚಾಯತ್ ರಾಜ್' ವ್ಯವಸ್ಥೆ ವಿಚಾರವಂತರಲ್ಲಿ ಆಸೆ ಹುಟ್ಟಿಸಿರುವಂತೆಯೇ ಗ್ರಾಮಾಂತರದ ಬಡವರು-ಜನಸಾಮಾನ್ಯರಲ್ಲಿ ಭಯ-ಆತಂಕಗಳನ್ನು ಹುಟ್ಟಿಸುವಂಥ ವಿದ್ಯಮಾನಗಳೂ ನಡೆದಿವೆ. ಈ ಎಲ್ಲವುಗಳ ಬಗೆಗಿನ ಹಲವು ಚಿತ್ರಣಗಳು, ಅವಲೋಕನಗಳು, ಅಭಿಪ್ರಾಯಗಳು ಮುಂತಾದವನ್ನು ಹಲವೆಡೆಗಳಿಂದ ಸಂಗ್ರಹಿಸಿ ಇಲ್ಲಿ ನೀಡುತ್ತಿದ್ದೇವೆ.

ಈ ಬಗ್ಗೆ ಈಗಾಗಲೇ ಸಾಕಷ್ಟು ವಿಚಾರಗಳನ್ನು ಓದುಗರ ಮುಂದಿಟ್ಟಿರುವ 'ಮುಂಜಾವು' ಪುನಃ ಇದನ್ನು ಪ್ರಕಟಿಸುತ್ತಿರುವುದಕ್ಕೆ ಕಾರಣ-ಈ ಪಂಚಾಯತ್ ರಾಜ್ ವ್ಯವಸ್ಥೆ ಪ್ರತಿಯೊಬ್ಬ ವಿಚಾರವಂತರೂ ಬಹಳ ಗಂಭೀರವಾಗಿ ಆಲೋಚಿಸಬೇಕಾದಂಥ ವಿಚಾರಗಳನ್ನೊಳಗೊಂಡಿರುವುದೇ ಆಗಿದೆ. —ಸಂ.

ರಾಜ್ಯದಲ್ಲಿ ಜಿಲ್ಲಾ ಪರಿಷತ್ ಹಾಗೂ ಮಂಡಲ ಪಂಚಾಯತ್‌ಗಳಿಗೆ ಸದಸ್ಯರು ಯಾರಿರಬೇಕು ಎನ್ನುವುದನ್ನು ತೀರ್ಮಾನಿಸಿದ ಮತದಾರ ಪ್ರಭು ತನ್ನ ಆಯ್ಕೆ ಮುಗಿಸಿದ್ದಾನೆ.

ಆದರೆ....

ಈ ಆಯ್ಕೆಗಳು ಮುಗಿದಿದ್ದರೂ ಇದಕ್ಕೆ ಸಂಬಂಧಪಟ್ಟಂತೆ ಪಟ್ಟಭದ್ರರಿಂದ ಹಾಗೂ ಪುಢಾರಿಗಳಿಂದ – ಅವರ ಹಿಂಬಾಲಕರಿಂದ ಜಗಳ, ಘರ್ಷಣೆ, ಹೊಡೆದಾಟ, ಗೂಂಡಾಗಿರಿ, ದಾದಾಗಿರಿಗಳು ನಡೆಯುತ್ತಲೇ ಇವೆ. ಜಗಳ ಮುಗಿದಿಲ್ಲ–ಮುಂದುವರಿಯುತ್ತಿದೆ.

ಪರಿಣಾಮವಾಗಿ, ಈ ಕೊಳಚೆ ರಾಜಕೀಯ ಹಾಗೂ ರಾಜಕಾರಣಿಗಳಿಗೆ ನೇರ ಸಂಬಂಧಿಸಿರದ ಸಾಮಾನ್ಯ ಪ್ರಜೆ ಅನೇಕ

## ಮುಗಿದ ಆಯ್ಕೆ; ಮುಗಿಯದ ಜಗಳ

ಕಡೆ ಉಳ್ಳವರ – ರಾಜಕೀಯ ಕೊಬ್ಬಿನವರ ಕಾಲ್ತುಳಿತಕ್ಕೆ ಸಿಕ್ಕಿದ್ದಾನೆ, ಸಿಕ್ಕಿ ನರಳುತ್ತಿದ್ದಾನೆ.

ರಾಜಕೀಯದ ನಂಜು ಅವನ ದಿನಚರಿಗೆ ಕಹಿ ವಿಷ ಬೆರೆಸಿದೆ. ಸೋತವರ ಸೇಡಿಗೆ ಅವನು ಕಾನೂನು ಬಾಹಿರವಾಗಿ ಗುರಿಯಾಗುತ್ತಿದ್ದಾನೆ. **ಕಾನೂನು ಪಾಲಕರು ಈ ಗೊಂದಲದಲ್ಲಿ ತಮಗೇನೂ ಆಗದಂತೆ ನೋಡಿಕೊಳ್ಳುವಲ್ಲೆ ಸುಸ್ತು ಹೊಡೆಯುತ್ತಿದ್ದಾರೆ.**

ಚಿಕ್ಕಮಗಳೂರು ಜಿಲ್ಲೆಯ ಸಂಗಮೇಶ್ವರ ಪೇಟೆಯ ಪರಿಸರದಲ್ಲಿ ಕಾಂಗ್ರೆಗೆ ಮತ ಹಾಕಿದ ತಪ್ಪಿಗೆ ಬಡಪಾಯಿ ಮತದಾರರು ಜನತಾ ಪಾಳೇಗಾರರ ಹೊಡೆತ – ಪುಂಡಾಟಿಕೆಗಳಿಗೆ ತುತ್ತಾಗಿದ್ದರೆ ಸಕಲೇಶಪುರ ತಾಲ್ಲೂಕ್ ಸುಂಡೇಕೆರೆಯಲ್ಲಿ ಜನತಾಕ್ಕೆ ಮತ ಹಾಕಿದ 'ಮಹಾಪರಾಧ'ಕ್ಕಾಗಿ ಬಡ ಮತದಾರರು ಸೋತ ಕಾಂಗ್ರೆಸವರ ಪುಂಡಾಟಕ್ಕೆ ಅವರುಗಳ ಮಚ್ಚು, ಬಂದೂಕಗಳಿಗೆ ಸಿಕ್ಕಿ ಜರ್ಝರಿತರಾಗುತ್ತಿದ್ದಾರೆ.

ರಾಜ್ಯದ ಅನೇಕ ಗ್ರಾಮೀಣ ಭಾಗಗಳ ಚಿತ್ರ ಇದೇ ಆಗಿದೆ

ಕ್ಯಾನ್‌ವಾಸ್‌ಗಿಂತ ಕ್ಯಾಶ್‌ಗಳೇ ವಿಜಯಕ್ಕೆ ಮೆಟ್ಟಿಲು ಎಂದು ನಂಬಿ ನಡೆದ ಪುಢಾರಿಗಳು ಸೋತಾಗ, ಪಕ್ಷಭೇದ ತೊರೆದು ಎದುರಾಳಿಯ ಅಕ್ರಮಗಳ ಪಟ್ಟಿ ಮಾಡ ಹೊರಡುತ್ತಾರ. ತಮ್ಮ ಬೆನ್ನಸ್ನಾಗಲಿ ತಮ್ಮ ಸೋಲಿನ ನಿಜವಾದ ಕಾರಣಗಳನ್ನಾಗಲಿ ಅರಿವ ಆತ್ಮನಿರೀಕ್ಷೆ ನಡೆಯಬೇಕಿದ್ದ ಪ್ರಮಾಣದಲ್ಲಿ ನಡೆಯುತ್ತಿಲ್ಲ.

ಸಮುದ್ರ ಮಂಥನ ನಡೆದಾಗ "ಅಮೃತ" ಹುಟ್ಟಿ ಬರುವುದೆಂದು ಕಾದು ಕುಳಿತಿದ್ದರೆ "ಹಾಲಾಹಲ" ಉಕ್ಕಿ ಬಂತಂತೆ. ಜಿ.ಪ., ಮಂ. ಪಂಚಾಯತ್ ಚುನಾವಣೆಗಳ ಸಮುದ್ರ ಮಂಥನ ನಡೆದಾಗ "ಅಧಿಕಾರ ವಿಕೇಂದ್ರೀಕರಣ"ದ ಅಮೃತ ಹುಟ್ಟಿ ಬರುವುದೆಂದು ಮತದಾರ ಕಾದು ಕುಳಿತಿದ್ದರೆ "ಸೇಡು–ದ್ವೇಷಗಳ ದಳ್ಳುರಿಯ ಹಾಲಾಹಲ" ಉಕ್ಕಿ ಬರುತ್ತಿದೆ.

ಈ ಎಲ್ಲ ದ್ವೇಷ, ದಳ್ಳುರಿಗಳನ್ನು ಶಮನಗೊಳಿಸಿ, ರಾಜ್ಯಾದ್ಯಂತ ಈ ಚುನಾವಣೆಗಳು ಅಧಿಕಾರ ವಿಕೇಂದ್ರೀಕರಣದಂತಹ ಒಂದು ಉತ್ತಮವಾದ ಉದ್ದೇಶಕ್ಕೆ ನಡೆದದ್ದು. ಆದ್ದರಿಂದ ಇದರ ಫಲಶ್ರುತಿಯೂ ಉತ್ತಮವಾಗಬೇಕೆಂದು ಇಚ್ಛಿಸುವ "ಜನಶಕ್ತಿ" ಆ ದಿಕ್ಕಲ್ಲಿ ತಕ್ಷಣ ಕಾರ್ಯ ಪ್ರವೃತ್ತವಾಗಬೇಕಿದೆ. ತನ್ನ ಪರಿಸರದಲ್ಲಿ ದ್ವೇಷ ಮೊಳಕೆ ಒಡೆಯದಂತೆ ನೋಡಿಕೊಳ್ಳಬೇಕಿದೆ.

ಈ ಕಾರ್ಯಕ್ಕೆ ಸರ್ಕಾರ ತನ್ನ ಪೂರ್ಣ ಸಹಕಾರವನ್ನು ತಕ್ಷಣ ನೀಡುವುದರೊಂದಿಗೆ ಶಾಂತಿ ಪಾಲನೆ - ಸುವ್ಯವಸ್ಥೆಗಳಿಗೆ ಆದ್ಯ ಗಮನ ನೀಡಬೇಕಿದೆ.

(ಸೌಜನ್ಯ : 'ಸ್ಫುರಣ')

## ಜಿಲ್ಲಾ ಪರಿಷತ್ ಚುನಾವಣೆಯ ಫಲಿತಾಂಶಗಳು: 'ಮತಭಿಕ್ಷುಕರು' ನೆನಪಿಡಬೇಕಾದ ಎಚ್ಚರಿಕೆಯ ಗೋಡೆಬರಹ

ಜಿಲ್ಲಾ ಪರಿಷತ್, ಮಂಡಲ ಪಂಚಾಯತ್ ಚುನಾವಣೆಗಳು ಮುಗಿದು, ಫಲಿತಾಂಶಗಳೂ ಬಂದಿವೆ. ಮೇಲ್ನೋಟಕ್ಕೆ ಮಿಶ್ರ ಫಲಿತಾಂಶದಂತೆ ಕಂಡುಬರುವ ಫಲಿತಾಂಶ ಅನೇಕ ರೀತಿ ಎಚ್ಚರಿಕೆಗಳನ್ನೂ ನೀಡಿದೆ. ಎಲ್ಲಾ ಮತ ಭಿಕ್ಷುಕರೂ–ಪಕ್ಷಭೇದ ತೊರೆದು ನೆನಪಿಡಬೇಕಾದ ಮಹತ್ವದ ಅಂಶ ಇದು

ಕಾಂಗ್ರೆನಿಂದ ಜನತಾಕ್ಕೆ ಹಾರಿ ಮೂಡಿಗೆರೆ ತಾ|| ಬಣಕಲ್‌ನಿಂದ ಜಿಲ್ಲಾ ಪರಿಷತ್‌ಗೆ ಸ್ಪರ್ಧಿಸಿದ್ದ ವಿಧಾನ ಪರಿಷತ್ ಮಾಜಿ ಉಪಸಭಾಪತಿ ಜಿ. ಪುಟ್ಟಸ್ವಾಮಿಯನ್ನು ಪರಾಭವಗೊಳಿಸಿರುವಂತೆಯೆ ಜನತಾದಿಂದ ಕಾಂಗ್ರೆಗೆ ಹಾರಿ ಬೇಲೂರು ತಾ|| ಹಗರೆಯಿಂದ ಸ್ಪರ್ಧಿಸಿದ್ದ ಮಾಜಿ ಶಾಸಕ ಮಲ್ಲೇಶ್‌ರನ್ನೂ ಜನ ತಿರಸ್ಕರಿಸಿದ್ದಾರೆ.

ಪಕ್ಷ ಟಿಕೇಟ್ ಕೊಡದಿದ್ದಾಗ ತನ್ನ ಕರ್ತೃತ್ವದ ಬಲದ ಮೇಲೆ ಜಿಲ್ಲಾ ಪರಿಷತ್‌ಗೆ ಪಕ್ಷೇತರರಾಗಿ ಕಡೂರು ತಾ|| ಸಕ್ರೆಪಟ್ನದಿಂದ ಸ್ಪರ್ಧಿಸಿದ್ದ ಬಾಣೂರು ಸೋಮಶೇಖರಪ್ಪನವರಿಗೆ ಮತದಾರ ವಿಜಯಮಾಲೆ ಹಾಕಿದ್ದರೆ, ಪಕ್ಷ ಟಿಕೇಟ್ ಕೊಡದಿದ್ದಾಗ ಜಾತಿಯನ್ನೆ ಬಂಡವಾಳ ಮಾಡಿಕೊಂಡು ಪಕ್ಷೇತರರಾಗಿ ಚಿಕ್ಕಮಗಳೂರು ತಾ|| ಅಂಬಳೆಯಿಂದ ಜಿಲ್ಲಾ ಪರಿಷತ್‌ಗೆ ಸ್ಪರ್ಧಿಸಿದ್ದ ಎಂ. ವಿ. ಷಡಕ್ಷರಿಯವರನ್ನು ಮತದಾರ ಮೂರನೇ ಸ್ಥಾನಕ್ಕೆ ತಳ್ಳಿದ್ದಾನೆ.

ಹಾಸನ–ಚಿಕ್ಕಮಗಳೂರು ಜಿಲ್ಲೆಗಳೆರಡರಲ್ಲೂ ಜನತಾ ಪಕ್ಷದ ಜಿಲ್ಲಾಧ್ಯಕ್ಷರುಗಳನ್ನು ಸೋಲಿಸಿರುವ ಮತದಾರ "ಗತ್ತು" ಬಿಟ್ಟು ವರ್ತಿಸಲು ಇಬ್ಬರನ್ನೂ ಎಚ್ಚರಿಸಿದ್ದಾನೆ.

ಈ ಮೂಲಕ, ಪಕ್ಷದಿಂದ ಪಕ್ಷಕ್ಕೆ ಜಿಗಿಯುವ ಮಂಗನಾಟವನ್ನಾಗಲಿ, ಜಾತಿಯನ್ನಾಗಲಿ, ಗತ್ತನ್ನಾಗಲಿ ಇನ್ನು ಈ ಮತಭಿಕ್ಷುಕರು ಬಂಡವಾಳ ಮಾಡಿಕೊಳ್ಳುವುದನ್ನು ತಾನು ಸಹಿಸುವುದಿಲ್ಲವೆಂದು ಶಾಂತವಾಗಿ "ಬ್ಯಾಲಟ್" ಏಟಿನಿಂದ ತೋರಿಸಿದ್ದಾನೆ.

("ಸ್ಫುರಣ" ಸಂಪಾದಕೀಯದಿಂದ)

## ಜಿಲ್ಲಾ ಪರಿಷತ್ "ಸದಸ್ಯತ್ವ" ಯಾರ್ಯಾರಿಗೆ....

ಜಿಲ್ಲಾ ಪರಿಷತ್ ಹಾಗೂ ಮಂಡಳ ಪಂಚಾಯ್ತಿ ಅಧ್ಯಕ್ಷ-ಉಪಾಧ್ಯಕ್ಷರ ಚುನಾವಣೆಗಳು ಫೆಬ್ರವರಿ 20ರ ನಂತರ ನಡೆಯುವ ನಿರೀಕ್ಷೆ ಇದೆ.

ಇತ್ತೀಚೆಗೆ ಬಂದಿರುವ ಕೆಲವು ವಿವರಣೆಯಂತೆ ಜಿಲ್ಲಾ ಪರಿಷತ್ ಅಧ್ಯಕ್ಷ ಚುನಾವಣೆ ಸೇರಿದಂತೆ ಉಳಿದ ನಡವಳಿಕೆಗಳಲ್ಲಿ ವಿಧಾನಸಭಾ ಸದಸ್ಯರು, ಲೋಕಸಭಾ ಸದಸ್ಯರು ಯಾವ ರೀತಿಯ ನಿರ್ಬಂಧವಿಲ್ಲದೆ ಭಾಗವಹಿಸಿ ಮತ ಚಲಾಯಿಸಬಹುದಾಗಿದೆ. ರಾಜ್ಯಸಭಾ ಸದಸ್ಯರನ್ನು ಜಿಲ್ಲಾ ಪರಿಷತ್ ವ್ಯಾಪ್ತಿಯಿಂದ ಹೊರತಾಗಿಸಲಾಗಿದೆ

ನಾಮಕರಣಗೊಂಡ ಅಥವಾ ಕೆಳಗಿನ ಮನೆಯಿಂದ ಆಯ್ಕೆಯಾದ ವಿಧಾನ ಪರಿಷತ್ ಸದಸ್ಯರು, ಜಿಲ್ಲಾ ಪರಿಷತ್ ಕ್ಷೇತ್ರದ ವ್ಯಾಪ್ತಿಯಲ್ಲಿ ಎಲ್ಲಾದರೂ ಮತದಾರರಾಗಿದ್ದರೆ ಮಾತ್ರ ಜಿಲ್ಲಾ ಪರಿಷತ್ತಿನ ಸದಸ್ಯರಾಗಿ ಸಭಾ ನಡವಳಿಕೆ, ಅಧ್ಯಕ್ಷರ ಚುನಾವಣೆಯಲ್ಲಿ ಭಾಗವಹಿಸಬಹುದಾಗಿದೆ. ಪರಿಷತ್ ಸದಸ್ಯರು ನಗರಸಭೆ ಅಥವಾ ಪುರಸಭೆ ವ್ಯಾಪ್ತಿಗೆ ಬಂದರೆ ಜಿಲ್ಲಾ ಪರಿಷತ್ತಿನ ಸಭಾ ನಡವಳಿಕೆಗಳಲ್ಲಿ ಭಾಗವಹಿಸುವಂತಿಲ್ಲ.

ಪದವೀಧರ ಕ್ಷೇತ್ರ ಹಾಗೂ ಶಿಕ್ಷಕರ ಕ್ಷೇತ್ರದಿಂದ ಆಯ್ಕೆಯಾದ ವಿಧಾನ ಪರಿಷತ್ ಸದಸ್ಯರಿಗೆ, ಲೋಕಸಭಾ ಸದಸ್ಯರಿಗೆ ಅವರು ಪ್ರತಿನಿಧಿಸುವ ಎಲ್ಲಾ ಜಿಲ್ಲೆಗಳ ಜಿಲ್ಲಾ ಪರಿಷತ್ತಿನ ಸಭೆಗಳಲ್ಲಿ ಭಾಗವಹಿಸುವ, ಮತ ಚಲಾಯಿಸುವ ಹಕ್ಕಿದೆ.

### ನಮ್ಮ ಜಿಲ್ಲೆಯಲ್ಲಿ

ಚಿಕ್ಕಮಗಳೂರು ಜಿಲ್ಲೆಯ ಜಿಲ್ಲಾ ಪರಿಷತ್‌ನಲ್ಲಿ ಆಡಳಿತಾರೂಢ ಜನತಾ ಪಕ್ಷ 11 ಸ್ಥಾನ ಗಳಿಸಿದ್ದು, ವಿಧಾನ ಸಭೆಯ ಆರು ಮಂದಿ ಶಾಸಕರು, ಒಬ್ಬ ವಿಧಾನ ಪರಿಷತ್ ಸದಸ್ಯರು ಸೇರಿ 18 ಮಂದಿಯಾದರೆ, ಕಾಂಗ್ರೆಸ್ (ಐ)ನ 14 ಜಿಲ್ಲಾ ಪರಿಷತ್ ಸದಸ್ಯರು, ಒಬ್ಬರು ಲೋಕಸಭಾ ಸದಸ್ಯೆ ಸೇರಿ 15 ಮಂದಿ ಇದ್ದು, ಪಕ್ಷೇತರ ಸದಸ್ಯ ಬಾಣೂರು ಸೋಮಶೇಖರಪ್ಪ ಹಾಗೂ ಬಿ.ಜೆ.ಪಿ.ಯ ಪದವೀಧರ ಕ್ಷೇತ್ರದಿಂದ ಮತ್ತು ಶಿಕ್ಷಕ ಕ್ಷೇತ್ರದಿಂದ ಆಯ್ಕೆಯಾಗಿರುವ ಎಸ್. ಮಲ್ಲಿಕಾರ್ಜುನಯ್ಯ ಮತ್ತು ಕರಂಬಳ್ಳಿ ಸಂಜೀವ ಶೆಟ್ಟಿ ಇವರುಗಳು ಕಾಂಗ್ರೆ ಬೆಂಬಲಿಸಿದರೆ 18 ಸದಸ್ಯರಾಗಲಿದ್ದು, ಲಾಟರಿ ಮೂಲಕ ಅಧ್ಯಕ್ಷರ ಆಯ್ಕೆಯಾಗುವ ಪರಿಸ್ಥಿತಿ ಉದ್ಭವಿಸಲಿದೆ.

ಜನತಾ ಪಕ್ಷ ಪಕ್ಷೇತರರನ್ನು ತನ್ನ ಕಡೆಗೆ ಸೆಳೆದುಕೊಂಡಲ್ಲಿ 2 ಮತಗಳ ಅಂತರದಿಂದ ಗೆಲ್ಲುವ ನಿರೀಕ್ಷೆ ಇದೆ. (19–17)

ರಾಜ್ಯದ ಹಲವಾರು ಜಿಲ್ಲೆಗಳಲ್ಲಿ ಈ ಪರಿಸ್ಥಿತಿ ಉದ್ಭವಿಸಲಿದ್ದು, ಸರ್ಕಾರ ಕೆಲವು ಸದಸ್ಯರನ್ನು ನಾಮಕರಣ ಮಾಡುವ ಆಲೋಚನೆಯಲ್ಲಿರುವುದನ್ನು ವಿರೋಧ ಪಕ್ಷಗಳು ತೀವ್ರವಾಗಿ ವಿರೋಧಿಸಿವೆ.

(ಸೌಜನ್ಯ : 'ಜನಮಿತ್ರ')

## ಪದ್ಯದಂಕಣ

### ಕಡಲತೀರದಲೊಂದು ಸಂಜೆ

ದೊಡ್ಡವರ ದೊಡ್ಡ ಸಂಸಾರವೊಂದು
ಬಂತು ಕಾರಲ್ಲಿ, ಬಂದವರೇ
ಧುಮು ಧುಮು ಧುಮುಕಿ ನಡೆದರು
ತೀರದತ್ತ
ಗಂಡಸರು, ಹೆಂಗಸರು
ಖುಷಿ ಕೊಡುವ ಹುಡುಗಿಯರು
ಮಕ್ಕಳು ಮರಿಗಳು !
ಕುಣಿದು ಕುಪ್ಪಳಿಸಿ
ತಂದದ್ದೆಲ್ಲ ತಿಂದು
ಆಡಿದರು ಜಲಕ್ರೀಡೆ – ಮರಳಾಟ !
ಖುಷಿಗೆ ಮೆರುಗು ಕೊಟ್ಟಂತೆ
ಗಗನದ ಬಣ್ಣದ ತೆರೆ
ಮತ್ತೆ ಮತ್ತೆ ಬಹ ಶರಧಿಯಲೆ !
ಮೂಕೋ ಕಣ್ಣು ಹೊರಳಿತು ಕಾರಿನತ್ತ
ಬಾ[illegible]ಲಿಗೊರಗಿ ಬೀಡಿ ಸೇದುತ್ತಿದ್ದ ಚಾಲಕ;
ಈ ಎಲ್ಲ ಸೊಬಗಿಗೆ ನಿರ್ಲಿಪ್ತನಾಗಿ!
ಕೇವಲ ಕಾಯುತ್ತಲಿದ್ದ
ಗುಂಪು ತಿರುಗಿ ಬಂದೊಡನೆ
ಕಾರಿನ ಬಾಗಿಲು ತೆರೆಯಲಿಕ್ಕೆ !

—**ಹುವಾ[illegible]ೀ**, ಕಾರವಾರ

### ಸತ್ಯ

ಹೆಂಗಸರ ಮಾತೆಲ್ಲಾ
ಸುಳ್ಳು ಸಟೆಯೆನ್ನುವ ಗುಂಡ.
ತನ್ನ ಹೆಂಡತಿಯ ಚಾಡಿ-
ಮಾತುಗಳಲ್ಲಿ ಮಾತ್ರ ಸತ್ಯವನ್ನೇ ಕಂಡ.

### ಪದವಿ

ಪದವಿ ಪಡೆದ ಈತ
ದುರ್ದೈವಿ
ಬದುಕೆಲ್ಲಾ ಕಹಿಯೆನ್ನುವ
ಅನುಭವಿ

—**ಸರೋಜಾ**, ಮುಟಗೋಡು

## ಜಿಲ್ಲಾ ಪರಿಷತ್, ಮಂಡಲ ಪಂಚಾಯತ್ ಚುನಾವಣೆ ಮತ್ತು ಅನಂತರ.....

# ದಲಿತರ ಮೇಲಿನ ರಾಜಕೀಯ ಹಲ್ಲೆಗಳಿಗೆ ದ: ಸಂ: ಸ: ಖಂಡನೆ

ಜಿಲ್ಲಾ ಪರಿಷತ್, ಮಂಡಲ ಪಂಚಾಯಿತ್ತಿಗಳ ಚುನಾವಣೆಯ ಹಿನ್ನೆಲೆಯಲ್ಲಿ ಗ್ರಾಮಾಂತರದಲ್ಲಿ ದಲಿತ–ದುರ್ಬಲ ಜನತೆಯ ಮೇಲೆ ರಾಜಕೀಯ ದೌರ್ಜನ್ಯ, ಹಲ್ಲೆಗಳು ಹೆಚ್ಚಿರುವುದನ್ನು ಚಿಕ್ಕಮಗಳೂರು ಜಿಲ್ಲಾ ದಲಿತ ಸಂಘರ್ಷ ಸಮಿತಿ ಶಾಖೆ ಉಗ್ರವಾಗಿ ಖಂಡಿಸಿದೆ.

ಜನವರಿ 22ರಂದು ಸಂಗಮೇಶ್ವರ ಪೇಟೆ ಬೈರನಮಕ್ಕಿ ಗ್ರಾಮದಲ್ಲಿ ದಲಿತರ ಮೇಲೆ ಜನತಾ ಪಕ್ಷದ ಕೊಲ್ಲಪ್ಪಗೌಡ, ಕೃಷ್ಣೇಗೌಡರ ಗುಂಪಿನವರು ಹಲ್ಲೆ ಮಾಡಿದ್ದನ್ನು ದ.ಸಂ.ಸ. ಉದಹರಿಸಿ, ತಪ್ಪಿತಸ್ಥರ ವಿರುದ್ಧ ಉಗ್ರ ಕ್ರಮಕ್ಕಾಗಿ ಒತ್ತಾಯಿಸಿದೆ.

ಅಧಿಕಾರ ವಿಕೇಂದ್ರೀಕರಣ, ಗ್ರಾಮ ಸ್ವರಾಜ್ಯದ ಕಲ್ಪನೆಯನ್ನು ಸರಿಯಾಗಿ ಅರ್ಥೈಸಿಕೊಳ್ಳದೆ ಜಾತಿ ಅಮಲಿನಲ್ಲಿ ಹಳ್ಳಿಯನ್ನು ಸ್ಮಶಾನ ಮಾಡಲು ಹೊರಟಿರುವ ಕೆಲವು ಜಾತಿಗಳ ತೀಗೇಡಿಗಳಿಗೆ ಸದಾ ತಮ್ಮ ತಾಳಕ್ಕೆ ತಕ್ಕಂತೆ ದಲಿತರು, ಹಿಂದುಳಿದವರು ಕುಣಿಯ ಬೇಕೆನ್ನುವ ಹಂಬಲ. ಇದಕ್ಕೆ ವಿರುದ್ಧವಾದರೆ ಬಡವರ ಮೇಲೆ ಹಲ್ಲೆ, ಹಿಂಸೆ ಕೊಲೆಗಳು ನಡೆಯುತ್ತವೆ. 40 ವರ್ಷಗಳ ಹಿಂದೆ ಬ್ರಿಟಿಷರಿಂದ ಹಸ್ತಾಂತರಗೊಂಡ ಅಧಿಕಾರವನ್ನು ಈ ದೇಶದ ಶ್ರೀಮಂತ–ಜಾತಿವಾದಿಗಳು ಪಡೆದುಕೊಂಡು ಬಡವರು ಹಸಿವು, ಅಸ್ಪೃಶ್ಯತೆಯಿಂದ ತತ್ತರಿಸುವಂತೆ ಮಾಡಿದ್ದಾರೆ. ಅದೇ ರೀತಿ ಈಗ ಜಿಲ್ಲಾ, ಮಂಡಲ್ ಪಂಚಾಯಿತ್ತಿಗಳಿಗೆ ಅಧಿಕಾರ ವಿಕೇಂದ್ರೀಕರಣದ ಹೆಸರಿನಲ್ಲಿ ಹಸ್ತಾಂತರವಾಗುವ ಅಧಿಕಾರದಿಂದ ಗ್ರಾಮಾಂತರ ಪ್ರದೇಶಗಳಲ್ಲಿ ಹಿಂಸೆ ತಾಂಡವವಾಡುವ ಸೂಚನೆಗಳು ಕಾಣುತ್ತಿವೆ.

ಜವಾಬ್ದಾರಿ ಹೊತ್ತ ಪಕ್ಷಗಳ ಮುಖಂಡರುಗಳು ಬಡವರೊಂದಿಗೆ ಮಾನವೀಯ ಅನುಕಂಪದಿಂದ ವರ್ತಿಸದಿದ್ದರೆ ಗ್ರಾಮ ಸ್ವರಾಜ್ಯದ ಕನಸು ಬಡವರ ಪಾಲಿಗೆ ಮುಳ್ಳಾಗುವ ದಿನಗಳು ದೂರ ಇರಲಾರವು ಎಂದು ಸಮಿತಿ ವಿಶ್ಲೇಷಿಸಿದೆ.

ಜಿಲ್ಲೆಯ ಹಲವು ಕಡೆ ನಡೆಯುತ್ತಿರುವ ಇಂಥ ಹಲ್ಲೆ, ದೌರ್ಜನ್ಯಗಳ ಸಂಬಂಧದಲ್ಲಿ ಪೋಲೀಸ್ ಅಧಿಕಾರಿಗಳು ಮುಲಾಜಿಗೆ ಮಣಿಯದೆ ತಪ್ಪಿತಸ್ಥರ ಮೇಲೆ ಕ್ರಮ ಜರುಗಿಸಬೇಕೆಂದು ಒತ್ತಾಯಿಸಿರುವ ಸಂಘರ್ಷ ಸಮಿತಿಯು, ಬಡವರ ಮೇಲೆ ಹೀಗೆ ದೌರ್ಜನ್ಯಗಳು ಅಧಿಕಗೊಂಡರೆ ರಕ್ಷಣೆಗಾಗಿ ಅವರು ಬೀದಿಗಿಳಿಯುವುದು ಅನಿವಾರ್ಯವಾಗುತ್ತದೆ ಎಂದು ಎಚ್ಚರಿಸಿದೆ.

## ಕಾಫಿ ಸಹಾಯ ಧನಕ್ಕೆ ಅರ್ಜಿ ಆಹ್ವಾನ

ಚಿಕ್ಕಮಗಳೂರು: 1985ನೇ ಸಾಲಿನಲ್ಲಿ ಹೊಸದಾಗಿ ಕಾಫಿ ಹಾಕಿದ ತೋಟಗಳಿಗೆ ಕಾಫಿ ಮಂಡಳಿಯು ಎಕರೆಗೆ 1000/– ರೂಪಾಯಿಗಳಂತೆ ಸಹಾಯಧನ ನೀಡಲಿದ್ದು ಇದಕ್ಕಾಗಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

1983ನೇ ಸಾಲಿನಲ್ಲಿ ಹೊಸದಾಗಿ ಕಾಫಿ ಹಾಕಿದ ತೋಟಗಳಿಗೆ ಮಂಜೂರಾದ ಸಹಾಯ ಧನದ ಬಾಬ್ತು ಎರಡನೆ ಕಂತಿಗೂ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಅರ್ಜಿ ನಮೂನೆಗಳು ಆಯಾ ಪ್ರದೇಶದ ಕಾಫಿ ಮಂಡಳಿ ಸಂಪರ್ಕಾಧಿಕಾರಿಗಳ ಕಛೇರಿಯಲ್ಲಿ ದೊರೆಯಲಿದ್ದು ಸೂಕ್ತ ದಾಖಲೆಗಳೊಂದಿಗೆ ಅರ್ಜಿಗಳನ್ನು ಅದೇ ಕಛೇರಿಗೆ 1987ನೇ ಮಾರ್ಚ್ 31ರೊಳಗಾಗಿ ಸಲ್ಲಿಸಬೇಕು. ಅನಂತರ ಸಲ್ಲಿಸಿದ ಅರ್ಜಿಗಳನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ ಎಂದು ಕಾಫಿ ಮಂಡಳಿ ಪ್ರಕಟಣೆ ತಿಳಿಸಿದೆ.

## ಓದುಗರ ಪತ್ರ

### ಸ್ವಾಮಿ ವಿವೇಕಾನಂದರ ವ್ಯಕ್ತಿತ್ವ – ವಿಚಾರ: ಸರಿಯಾದ ಚಿತ್ರಣ

ಶ್ರೀಯುತ ಗಣೇಶ ಪಟವರ್ಧನ್‌ರಿಗೆ,

25–1–87ರ 'ಮುಂಜಾವು'ನಲ್ಲಿ ತಮ್ಮ ಲೇಖನ ಓದಿದೆ. ಧಾಂ ಧೂಂ ವಿವೇಕಾನಂದರ ಉತ್ಸವಗಳ ಮಧ್ಯೆ ಸರಿಯಾದ ಒಂದು ವಿಶ್ಲೇಷಣೆಯ ಅಗತ್ಯವಿತ್ತು. ಅದನ್ನು ಪೂರೈಸಿದ್ದೀರಿ.

ಶ್ರೀ ಸಿರಿಮನೆ ನಾಗರಾಜರಿಂದ ತಾವಿನ್ನೂ ಯುವಕರೆಂದು ತಿಳಿದು ಬಂತು. (!) ಆ ಯುವಕತ್ವದ ಸ್ವಲ್ಪ ಅಂಶವನ್ನಾದರೂ ನಮ್ಮಂಥ ಮುದುಕರಿಗೆ ಹಂಚಿ ಕೊಡಿ ಮಹಾರಾಯರೇ!

ವಿವೇಕಾನಂದರ "ಅಭೀ ಅಭೀ" ಮಂತ್ರ ನಮ್ಮಲ್ಲಿ ಮೈಗೂಡಿ, ದರಿದ್ರ ಸ್ವಾರ್ಥ ನಾಶಗೊಂಡು, ನಮ್ಮ ಈ ಸಮಾಜ ಜೀವನದಲ್ಲಿ ಒಂದಿಷ್ಟು ಸುಂದರತೆ ಕಾಣುವಂತಾಗಲೆಂದು ನಿಮ್ಮೊಡನೆ ನಾನು ಹಾರೈಸುತ್ತೇನೆ.

**ಡಾ|| ಸಂ.ರಾ. ಕೋದಂಡರಾಮ್,**
ಉತ್ತಮೇಶ್ವರ

# ಕುಷ್ಠರೋಗ ನಿವಾರಣಾ ಮಾಸಾಚರಣೆ

ಕೊಪ್ಪ: ಇಲ್ಲಿನ ಪ್ರಾಥಮಿಕ ಆರೋಗ್ಯ ಕೇಂದ್ರದ ವ್ಯಾಪ್ತಿಯ ಹಳ್ಳಿಗಳಲ್ಲಿ ಜನವರಿ ತಿಂಗಳು ಪೂರ್ತಿ ಕುಷ್ಠರೋಗ ಮಾಸಾಚರಣೆ ಅಂಗವಾಗಿ ಆರೋಗ್ಯ ಶಿಕ್ಷಣ ಕಾರ್ಯಕ್ರಮಗಳು, ಕುಷ್ಠರೋಗ ತಪಾಸಣೆ ಮತ್ತು ಸಲಹೆ ಇತ್ಯಾದಿ ಕಾರ್ಯಕ್ರಮಗಳು ನಡೆದು ಅವುಗಳಲ್ಲಿ ಸಾರ್ವಜನಿಕರು ಆಸಕ್ತಿಯಿಂದ ಭಾಗವಹಿಸಿ, ಕುಷ್ಠ ರೋಗದ ಬಗ್ಗೆ ಹೆಚ್ಚಿನ ಮಾಹಿತಿ ಪಡೆದುಕೊಂಡುದಾಗಿ ವೈದ್ಯಾಧಿಕಾರಿ ಡಾ|| ಎಂ.ಜಿ. ಪ್ರಸಾದ್ ತಿಳಿಸಿದ್ದಾರೆ.

ಈ ಕಾರ್ಯಕ್ರಮಗಳ ಅಂತಿಮ ಹಂತವಾಗಿ ಜ. 30ರಂದು ಕೊಪ್ಪ ಮತ್ತು ಸರಹದ್ದಿನ ಕೆಲವು ಶಾಲೆಗಳಲ್ಲಿ ಮಕ್ಕಳಿಗೆ ಕುಷ್ಠರೋಗದ ಬಗ್ಗೆ ಮಾಹಿತಿ, ರೋಗ ತಪಾಸಣೆ, ಚಿಕಿತ್ಸೆ ಮತ್ತು ಸಲಹೆ, ವಸ್ತು ಪ್ರದರ್ಶನ ಮತ್ತು ಸಭೆಗಳನ್ನು ನಡೆಸಲಾಯಿತು ಸಂಜೆ ಆಸ್ಪತ್ರೆ ಆವರಣದಲ್ಲಿ ನಡೆದ ಸಾರ್ವಜನಿಕ ಸಭೆಯಲ್ಲಿ ಡಾ|| ಪ್ರಸಾದ್, ಕುಷ್ಠರೋಗದ ವಿವಿಧ ಮುಖಗಳು, ಪ್ರಾರಂಭಿಕ ಲಕ್ಷಣಗಳು, ಚಿಕಿತ್ಸೆ, ನಿವಾರಣೋಪಾಯ ಹಾಗೂ ವೈಜ್ಞಾನಿಕ ವಿಚಾರಗಳ ಬಗ್ಗೆ ಚಿತ್ರಗಳ ಸಮೇತ ಸವಿವರವಾದ ಉಪನ್ಯಾಸ ನೀಡಿದರು. ಸಾರ್ವಜನಿಕರ ಅನುಮಾನ-ಪ್ರಶ್ನೆಗಳಿಗೆ ಸೂಕ್ತ ಉತ್ತರಗಳನ್ನು ಕೊಟ್ಟರು. ಮುಖ್ಯ ಅತಿಥಿಯಾಗಿದ್ದ ಮಹಿಳಾ ವೈದ್ಯಾಧಿಕಾರಿ ಡಾ|| ಸಿ. ಕೆ. ಪದ್ಮಾವತಿ ಸಭೆಯಲ್ಲಿ ಹಾಜರಿದ್ದ ರೋಗಿಗಳಿಗೆ ಹಣ್ಣುಗಳನ್ನು ವಿತರಿಸಿ, ಕ್ರಮಬದ್ಧವಾದ ಚಿಕಿತ್ಸೆಯಿಂದ ಬೇಗ ಗುಣಮುಖರಾಗುವಂತೆ ಹಾರೈಸಿದರು. ರೋಗಿಗಳಿಗೆ ಹಣ್ಣುಗಳನ್ನೂ, ಚಿಕಿತ್ಸೆ ಮತ್ತು ಸಲಹೆಗಳನ್ನೂ ನೀಡಲಾಯಿತು.

ಪ್ರಾಥಮಿಕ ಆರೋಗ್ಯ ಘಟಕಗಳಲ್ಲೂ ಇದೇ ರೀತಿಯ ಕಾರ್ಯಕ್ರಮಗಳನ್ನು ನಡೆಸಿದ ವರದಿಗಳು ಬಂದಿರುವುದಾಗಿ ಡಾ|| ಪ್ರಸಾದ್ ತಿಳಿಸಿದ್ದಾರೆ.

## 'ತ್ಯಾಗರಾಜರ, ಪುರಂದರದಾಸರ ಆರಾಧನೆ

ಹರಿಹರಪುರ : ಇಲ್ಲಿಗೆ ಸಮೀಪದ ಸೂಸಿಯಲ್ಲಿ ತ್ಯಾಗರಾಜರ ಮತ್ತು ಪುರಂದರದಾಸರ 5ನೇ ವರ್ಷದ ಆರಾಧನೋತ್ಸವ ಈಚೆಗೆ ನಡೆಯಿತು. ಎರಡು ದಿನಗಳ ಕಾಲ ಸ್ಥಳೀಯ ಮತ್ತು ಅತಿಥಿ ಕಲಾವಿದರುಗಳಿಂದ ವಿವಿಧ ಸಂಗೀತ ಕಾರ್ಯಕ್ರಮಗಳು ಶ್ರೋತೃಗಳಿಗೆ ರಸದೌತಣ ನೀಡಿದವು.

### ಜಯಪುರದಲ್ಲಿ

ಇಲ್ಲಿನ ಶ್ರೀ ತ್ಯಾಗರಾಜರ ಮತ್ತು ಪುರಂದರ ದಾಸರ ಆರಾಧನಾ ಮಹೋತ್ಸವ ಸಮಿತಿಯ ಆಶ್ರಯದಲ್ಲಿ ನಡೆದ ಸಮಾರಂಭದಲ್ಲಿ ಮೊದಲಿಗೆ ದಾಸ ಶ್ರೇಷ್ಠರ ಭಾವಚಿತ್ರವನ್ನು ಅನಾವರಣ ಮಾಡಲಾಯಿತು. ನಂತರ ಸ್ಥಳೀಯ ಮತ್ತು ಅತಿಥಿ ಕಲಾವಿದರಿಂದ ಸಂಗೀತ ಸೇವೆ ಹಾಗೂ ಡಾ|| ಎನ್. ಆರ್. ಶೆಟ್ಟರಿಂದ ಉಪನ್ಯಾಸ ನಡೆದವು. (ವರದಿ : ಕೆ. ರಮೇಶ್)

## ಪದಾಧಿಕಾರಿಗಳು

ಬಾಳಗಡಿ : ಇಲ್ಲಿಯ ಸರ್ವೋದಯ ಯುವಕ ಸಂಘದ ನೂತನ ಸಾಲಿನ ಪದಾಧಿಕಾರಿಗಳು : ಬಿ.ಎನ್. ವಾಸುದೇವ (ಅಧ್ಯಕ್ಷ), ಕೆ. ಎಸ್. ವಿಜಯ ವಿಠಲ್ (ಕಾರ್ಯದರ್ಶಿ), ಹರೀಶ ಶರ್ಮ (ಖಜಾಂಚಿ), ಕೆ.ಎಸ್. ಶ್ರೀಧರ್, ಗಣೇಶ್ ಹಂದೆ, ಕೆ. ಎಸ್. ಪ್ರಕಾಶ್, ದೇವದಾಸ್, ಪಿ. ವಿ. ನರಸಿಂಹ, ವೆಂಕಟರಮಣಯ್ಯ ಮತ್ತು ಮೋಹನ ರಾವ್ (ಕಾರ್ಯಕಾರಿ ಸಮಿತಿ ಸದಸ್ಯರು)

ಸಂಘದ ವಾರ್ಷಿಕೋತ್ಸವವು ಫೆ. 21 ರಂದು ಬಾಳಗಡಿಯಲ್ಲಿ ನಡೆಯಲಿದೆ.

## ವಿವೇಕಾನಂದ ಜಯಂತಿ

ಹರಿಹರಪುರ : ಇಲ್ಲಿನ ಕಿರಿಯ ಕಾಲೇಜು ಮತ್ತು ರಾಷ್ಟ್ರೋತ್ಥಾನ ಬಳಗಗಳ ಸಂಯುಕ್ತ ಆಶ್ರಯದಲ್ಲಿ ಜ. 28ರಂದು ರಾಷ್ಟ್ರೀಯ ಯುವಜನ ಸಪ್ತಾಹದ ಅಂಗವಾಗಿ ಸ್ವಾಮಿ ವಿವೇಕಾನಂದರ ಜಯಂತಿ ಆಚರಿಸಲಾಯಿತು. ಬಳಗದ ಜಿಲ್ಲಾ ಸಂಚಾಲಕ ಕೆ. ಶಿವಸ್ವಾಮಿ ಉಪನ್ಯಾಸ ನೀಡಿದರು.

## ಭಾವಗೀತೆ ಅಕಾಡೆಮಿ

ಹರಿಹರಪುರ : ಭಾವಗೀತೆ ಅಕಾಡೆಮಿಯ ಸ್ಥಾಪನೆಯ ಅಂಗವಾಗಿ ಜ. 31ರಂದು ಇಲ್ಲಿನ ಪದವಿಪೂರ್ವ ಕಾಲೇಜಿನ ಸಭಾಂಗಣದಲ್ಲಿ ನಡೆದ ಸಮಾರಂಭದಲ್ಲಿ ಕಿರಣಕೆರೆ ಉಮೇಶ್‌ಚಂದ್ರನ್ ಮಧುರವಾಗಿ ಭಾವಗೀತೆಗಳನ್ನು ಹಾಡಿದರು. ಅಧ್ಯಾಪಕ ಉಮೇಶ್ ಗೌತಮ್ ಹಾರ್ಮೋನಿಯಂ ನುಡಿಸಿದರು.

# ಆಚಾರ್:4ನೇಬಾರಿ ಎಲ್ಲೈಸಿ 'ಕೋಟ್ಯಾಧೀಶ'

ಕೊಪ್ಪ: ಜೀವವಿಮಾ ನಿಗಮದ ಇಲ್ಲಿನ ಅಭಿವೃದ್ಧಿ ಅಧಿಕಾರಿ ಟಿ.ಆರ್. ಆಚಾರ್ಯ ಸತತವಾಗಿ 4ನೇ ವರ್ಷ 1 ಕೋಟಿ ರೂಪಾಯಿಗೂ ಮಿಕ್ಕಿದ ಜೀವವಿಮಾ ಪಾಲಿಸಿಗಳನ್ನು ಮಾಡಿಸಿ, ಮತ್ತಷ್ಟು ಯಶಸ್ಸಿನತ್ತ ಮುನ್ನಡೆದಿದ್ದಾರೆ.

ಶೃಂಗೇರಿಯ ಕು|| ಕೆ. ವಾಣಿ ಮತ್ತು ಕಟ್ಟಿನಮನೆಯ ಕೆ. ಅನಂತಮೂರ್ತಿ ಇವರಿಬ್ಬರೂ ತಲಾ 10 ಲಕ್ಷ ರೂ.ಗೂ ಮೀರಿ ವಿಮಾ ಪಾಲಿಸಿ ಮಾಡಿದ ಗೌರವಕ್ಕೆ ಪಾತ್ರರಾಗಿದ್ದಾರೆ.

ಕೊಪ್ಪದಇನ್ನೊಬ್ಬ ಅಭಿವೃದ್ಧಿಅಧಿಕಾರಿಗಳಾದ ಅನಂತರಾಮಯ್ಯ ಕೂಡ ಕಳೆದ ವರ್ಷ 1 ಕೋಟಿ ವ್ಯವಹಾರದ ಗಡಿ ದಾಟಿದ್ದು, ಈ ವರ್ಷ ಸಹ ಆ ಗುರಿಯತ್ತ ಮುನ್ನಡೆದಿದ್ದಾರೆ.

ಈ ಇಬ್ಬರು ಅಭಿವೃದ್ಧಿ ಅಧಿಕಾರಿಗಳ 'ಕೋಟಿ ವ್ಯವಹಾರ'ದ ಸತತವಾದ ಈ ಯಶಸ್ಸು ಮಲೆನಾಡಿನ ಈ ಪ್ರದೇಶಕ್ಕೊಂದು ಜೀವವಿಮಾ ನಿಗಮದ ಶಾಖಾ ಕಚೇರಿ ಬೇಕೆಂಬ ಪಾಲಿಸಿದಾರರ ಬೇಡಿಕೆಗೆ ವಿಪುಲವಾದ ಪುಷ್ಟಿ ನೀಡುತ್ತದೆ. ಈ ಕುರಿತು ನಿಗಮದ ಮಟ್ಟದಿಂದ ಸರ್ಕಾರಕ್ಕೆ ಶಿಫಾರ್ಸು ಹೋಗಿದ್ದು, ಕೇಂದ್ರ ಸರ್ಕಾರದ ಮಂಜೂರಾತಿ ಸಿಗಬೈಕಾಗಿದೆ ಎನ್ನಲಾಗಿದೆ.

ಜಿಲ್ಲೆಯ ಸಂಸತ್ಸದಸ್ಯರು ಹಾಗೂ ಪಾಲಿಸಿದಾರರ ಹಿತ ರಕ್ಷಣಾ ಕೌನ್ಸಿಲಿನ ಸದಸ್ಯರಾಗಿ ಆಯ್ಕೆಯಾಗಿರುವ ರಮೇಶ್ ರಾವ್ ಇವರುಗಳು ಈ ಬಗ್ಗೆ ತೀವ್ರವಾದ ಪ್ರಯತ್ನ ನಡೆಸಬೇಕೆಂಬುದು ಪಾಲಿಸಿದಾರರ ಅಪೇಕ್ಷೆಯಾಗಿದೆ.

## ದಿನಗೂಲಿ ನೌಕರರ ಸಾಂಕೇತಿಕ ಮುಷ್ಕರ

ಕೊಪ್ಪ : ರಾಜ್ಯ ಸರ್ಕಾರದ ದಿನಗೂಲಿ ನೌಕರರ ಸಂಘದ ಕರೆಯ ಮೇರೆಗೆ ಕೊಪ್ಪ ತಾಲ್ಲೂಕಿನ ದಿನಗೂಲಿ ನೌಕರರು ತಮ್ಮ ಬೇಡಿಕೆಗಳ ಈಡೇರಿಕೆಗೆ ಸರ್ಕಾರವನ್ನು ಒತ್ತಾಯಿಸುವ ಸಲುವಾಗಿ ಜ. 29ರಿಂದ ಫೆ. 3ರವರೆಗೆ ಕಪ್ಪು ಪಟ್ಟಿ ಧರಿಸಿ ಕೆಲಸ ಮಾಡುವ ಮೂಲಕ ಸಾಂಕೇತಿಕ ಮುಷ್ಕರ ನಡೆಸಿದರು. ಜಿಲ್ಲಾ ಕಾರ್ಯಕಾರಿ ಸದಸ್ಯೆ ಕು|| ಶಶಿಕಲಾ ಮುಷ್ಕರದ ನೇತೃತ್ವ ವಹಿಸಿದ್ದರು.

## ಏಲಕ್ಕಿ ಧಾರಣೆ

### ಸಕಲೇಶಪುರ

| ತಾರೀಕು | ಗರಿಷ್ಠ | ಸರಾಸರಿ |
|---|---|---|
| 19.1.87 | 195 | 109 |
| 20.1.87 | 205 | 115 |
| 21.1.87 | 172 | 112 |
| 24.1.87 | 219 | 129 |

## ಅಡಿಕೆ ಧಾರಣೆ

**ಶಿವಮೊಗ್ಗ ತಾ|| 4.2.1987**

ಸರಕು : 3000 – 3655
ಬೆಟ್ಟೆ : 1769 – 2119
ಗೊರಬಲು : 795 – 1022

## ಮೇರುತಿ ಜೇಸೀಸ್ ನೂತನ ಪದಾಧಿಕಾರಿಗಳ ಪ್ರಮಾಣ ವಚನ ಸ್ವೀಕಾರ

ಬಿಳಾಲುಕೊಪ್ಪ : ಇಲ್ಲಿನ ಮೇರುತಿ ಜೇಸೀಸ್‌ನ ನೂತನ ಸಾಲಿನ ಪದಾಧಿಕಾರಿಗಳ ಪ್ರಮಾಣ ವಚನ ಸ್ವೀಕಾರ ಸಮಾರಂಭ ಜ. 17ರಂದು ನಡೆಯಿತು. ಕರ್ನಾಟಕ ಜೇಸೀಸ್ ಅಧ್ಯಕ್ಷ ಶ್ರೀಕಾಂತ್ ಛತ್ರಪತಿ, ಉಪಾಧ್ಯಕ್ಷ ಎಂ. ಜಿ. ಸೋಮಶೇಖರ್ ಹಾಗೂ ಕವಿ – ಸಾಹಿತಿ "ಹೇರೂರು ಮೆನನ್" ಮುಖ್ಯ ಅತಿಥಿಗಳಾಗಿದ್ದರು. ಸಮಾರಂಭದ ಅಂಗವಾಗಿ ರಾತ್ರಿ ರಸಮಂಜರಿ ಕಾರ್ಯಕ್ರಮ ನಡೆಯಿತು. ಬಿ. ರಮೇಶ್ ರಾವ್ ಅಧ್ಯಕ್ಷರಾಗಿ, ಬಿ. ಎಲ್. ವೆಂಕಟರಮಣ ಕಾರ್ಯದರ್ಶಿಯಾಗಿ ಆಯ್ಕೆಯಾಗಿದ್ದಾರೆ.

### ಬಾಳೆಹೊನ್ನೂರು ಜೇಸೀಸ್

ಮೇರುತಿ ಜೇಸೀಸ್‌ನವರು ಪ್ರವರ್ತಕರಾಗಿ ಹೊಸದಾಗಿ ಆರಂಭಿಸಿರುವ ಬಾಳೆಹೊನ್ನೂರು ಜೇಸೀಸ್‌ನ ಉದ್ಘಾಟನೆ ಬಾಳೆಹೊನ್ನೂರಿನಲ್ಲಿ ಅದೇ ಸಂಜೆ ನಡೆಯಿತು. ಶ್ರೀಕಾಂತ್ ಛತ್ರಪತಿ, ಸೋಮಶೇಖರ್, ಎಚ್. ಬಿ. ರಾಜಗೋಪಾಲ್, ಡಾ|| ವಿನೋದ್ ಮುಖ್ಯ ಅತಿಥಿಗಳಾಗಿದ್ದರು. ಕೆ. ಆರ್. ಬದರೀನಾಥ್ ಅಧ್ಯಕ್ಷರಾಗಿ, ಎ. ಆರ್. ವೆಂಕಟೇಶ್ ಕಾರ್ಯದರ್ಶಿಯಾಗಿ ಆಯ್ಕೆಯಾಗಿದ್ದಾರೆ

ತೀರಾ ಹಳ್ಳಿಯ ಇಂಥ ಸಂಸ್ಥೆಯೊಂದು ಪಟ್ಟಣವೊಂದರಲ್ಲಿ ಒಂದು ಘಟಕ ಆರಂಭಿಸುತ್ತಿರುವುದು ಬಹುಶಃ ಒಂದು ವಿಶೇಷವೆನ್ನಬಹುದು.





ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು: ದೀಪಟಿಗೆ ಅಚ್ಚುಕೂಟ, ಕೊಪ್ಪ.